# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 07
ಸದಸ್ಯರ ಹೆಸರು : ಶ್ರೀ ಎಂ.ಪಿ. ಸುನೀಲ್ ಸುಬ್ರಮಣಿ
ಉತ್ತರಿಸುವ ಸಚಿವರು : ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 09–07–2018

| | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯದ ರಸ್ತೆ ಸಾರಿಗೆ ಸಂಸ್ಥೆಗಳಲ್ಲಿ ದುಡಿಯುವ ಚಾಲಕರಿಗೆ ನೀಡಲಾಗುತ್ತಿರುವ ವೇತನ ಮತ್ತು ಇತರೇ ಸೌಲಭ್ಯಗಳೇನು; (ಪೂರ್ಣ ವಿವರ ನೀಡುವುದು) | ಕರ್ನಾಟಕ ರಾಜ್ಯದ ರಸ್ತೆ ಸಾರಿಗೆ ಸಂಸ್ಥೆಗಳಲ್ಲಿ ದುಡಿಯುವ ಚಾಲಕರಿಗೆ ನೀಡಲಾಗುತ್ತಿರುವ ವೇತನ ಮತ್ತು ಇತರೇ ಸೌಲಭ್ಯಗಳ ವಿವರವನ್ನು ಅನುಬಂಧ–ಅ ನಲ್ಲಿ ನೀಡಲಾಗಿದೆ. |
| ಆ | ಈ ಚಾಲಕರುಗಳು 55 ವರ್ಷ ತುಂಬಿದ ನಂತರವು ಭಾರಿ ವಾಹನ ಚಾಲನೆ ಮಾಡಲು ಶಕ್ತರಾಗಿರುತ್ತಾರೆಯೇ: 55 ವರ್ಷ ತುಂಬಿರುವ ಚಾಲಕರುಗಳಿಗೆ ಸಾಮಾರ್ಥ್ಯ ಪರೀಕ್ಷಿಸಲು ಇರುವ ಮಾನದಂಡಗಳೇನು: (ವಿವರ ನೀಡುವುದು) | ಭಾರಿ ವಾಹನ ಚಾಲಕರ ಚಾಲನಾ ಪರವಾನಗಿ ಅವಧಿ ಮುಗಿದು, ಅದನ್ನು ನವೀಕರಿಸುವ ಸಂದರ್ಭದಲ್ಲಿ ಕಡ್ಡಾಯವಾಗಿ ಸಾಮರ್ಥ್ಯ ಪರೀಕ್ಷಿಸಿ ಚಾಲಕರು ವಾಹನವನ್ನು ಚಲಾಯಿಸಲು ಶಕ್ತವಾಗಿರುವ ಕುರಿತು, ವೈದ್ಯಕೀಯ ದೃಢೀಕರಣ ಪತ್ರವನ್ನು ಪಡೆದುಕೊಂಡು, ಅದನ್ನು ಆಧರಿಸಿ ಚಾಲನಾ ಪರವಾನಗಿಯನ್ನು ನವೀಕರಿಸಲಾಗುವುದು. |
| ಇ | ಸಾರಿಗೆ ಇಲಾಖೆಯಲ್ಲಿ 55 ವರ್ಷ ತುಂಬಿರುವ ಚಾಲಕರುಗಳಿಗೆ ಹೆಚ್ಚಿನ ಗ್ರಾಚ್ಯುಟಿಯೊಂದಿಗೆ ವಿಶೇಷ ಸ್ವ–ನಿವೃತ್ತಿ ಯೋಜನೆಗಳು ಇವೆಯೇ: ಇಲ್ಲದಿದ್ದಲ್ಲಿ, ಇದನ್ನು ಜಾರಿಗೆ ತರಲು ಸರ್ಕಾರದ ಕ್ರಮಗಳೇನು? (ಪೂರ್ಣ ವಿವರ ನೀಡುವುದು) | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಲ್ಲಿ ನೌಕರರಿಗೆ ಹೆಚ್ಚಿನ ಗ್ರಾಚ್ಯುಟಿಯೊಂದಿಗೆ ವಿಶೇಷ ಸ್ವ–ನಿವೃತ್ತಿ ಯೋಜನೆಗಳು ಇರುವುದಿಲ್ಲ.<br>ಆದಾಗ್ಯೂ, ದೈಹಿಕವಾಗಿ ಅಸಮರ್ಥಗೊಂಡ ಅಧಿಕಾರಿ/ನೌಕರರ ಸ್ವಯಂ ನಿವೃತ್ತಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಸದರಿ ಆಕರ್ಷಕ ಸ್ವಯಂ ನಿವೃತ್ತಿ ಯೋಜನೆಯನ್ವಯ ಸಿಬ್ಬಂದಿಗಳ ಬಾಕಿ ಉಳಿದಿರುವ ಸೇವಾವಧಿಯ ಆಧಾರದ ಮೇಲೆ ಗರಿಷ್ಠ 6 ಲಕ್ಷದವರೆಗೆ ಹೆಚ್ಚುವರಿ ಆರ್ಥಿಕ ಸೌಲಭ್ಯವನ್ನು ನೀಡಲಾಗುತ್ತಿದೆ. |

ಸಂ: ಸಾರಿಇ 84 ಸಾಸಂಪ್ರ 2018

(ಡಿ.ಸಿ. ತಮ್ಮಣ್ಣ)
ಸಾರಿಗೆ ಸಚಿವರು

## ಅನುಬಂಧ-ಅ

ಕರಾರಸಾನಿಗಮದಲ್ಲಿ ದುಡಿಯುವ ಚಾಲಕರಿಗೆ ನೀಡಲಾಗುತ್ತಿರುವ ವೇತನ ಮತ್ತು ಇತರೆ ಭತ್ಯೆಗಳು.

1) ಕರ್ನಾಟಕ ರಾಜ್ಯದ ರಸ್ತೆ ಸಾರಿಗೆ ಸಂಸ್ಥೆಗಳಲ್ಲಿ ದುಡಿಯುವ ಚಾಲಕರಿಗೆ ಕಾಲಿಕ ವೇತನ ಶ್ರೇಣಿ 12400-170-12740-250-14240-320-15840-420-16680-530-18270-640-19550ಯಲ್ಲಿ ವೇತನ ನಿಗದಿಪಡಿಸಿದೆ.

2) ಹದಿನೈದು ವರ್ಷಸೇವೆ ಸಲ್ಲಿಸಿದ ಚಾಲಕರಿಗೆ ಉನ್ನತ ವೇತನ ಶ್ರೇಣಿ 16730-420-17570-530-19160-640-21720-730-23910 ಯಲ್ಲಿ ವೇತನ ನಿಗದಿಪಡಿಸಿದೆ.

3) ಇಪ್ಪತ್ತೈದು ವರ್ಷ ಸೇವೆ ಸಲ್ಲಿಸಿದಲ್ಲಿ ಅವರನ್ನು ಹಿರಿಯ ಚಾಲಕರೆಂದು ಪರಿಗಣಿಸಿ ಹಿರಿಯ ಚಾಲಕ ವೇತನ ಶ್ರೇಣಿ 18000-640-19920-730-25030-830-30010 ಯಲ್ಲಿ ವೇತನ ನಿಗದಿಪಡಿಸಿದೆ.

4) ದಿನವಹಿ ಸಾರಿಗೆ ಆದಾಯದ ಮೇಲೆ ಶೇ1. ರಷ್ಟು ಪ್ರೋತ್ಸಾಹ ಧನ ನೀಡಲಾಗುತ್ತಿದೆ.

5) ಮಾಹೆಯಾನ ವೇತನದೊಂದಿಗೆ ಅವರ ನಿರ್ವಹಿಸಿದ ಕರ್ತವ್ಯಕ್ಕೆ ಅನುಗುಣವಾಗಿ ಅಧಿಕಾವಧಿ ಮತ್ತು ದಿನವಹಿ ಬಾಟಾ/ರಾತ್ರಿ ಭತ್ಯೆ/ವಿಶೇಷ ಭತ್ಯೆಗಳನ್ನು ಈ ಕೆಳಗಿನಂತೆ ನೀಡಲಾಗುತ್ತದೆ.

| ಭತ್ಯೆಗಳ ವಿವರ | ವಿವರಣೆ | ದಿನವಹಿ ಭತ್ಯೆಗಳು(ರೂ) |
|---|---|---|
| ಬಾಟಾ | 200 ಕಿ.ಮೀ ವರೆಗೆ | 20.00 |
| | 201-400 ಕಿ.ಮೀ ವರೆಗೆ | 25.00 |
| | 401 ಕಿ.ಮೀ ಮತ್ತು ಮೇಲ್ಪಟ್ಟು | 40.00 |
| | ನಮೂನೆ 4 ರನ್ವಯ ಅನುಸೂಚಿಯ ಎಲ್ಲಾ ಸುತ್ತುವಳಿಗಳನ್ನು ಪೂರ್ತಿಗೊಳಸಿದಲ್ಲಿ ವಿಶೇಷ ಭತ್ಯೆ | 08.00 |
| ಭತ್ಯೆ (ರಾತ್ರಿ ತಂಗುವಿಕೆ) | ರಾತ್ರಿ ತಂಗುವಿಕೆ | 15.00 |
| | ಎರಡನೆ ಮತ್ತು ನಂತರದ ರಾತ್ರಿ ತಂಗುವಿಕೆ | 30.00 |
| | ಮುಂಬಯಿಯಲ್ಲಿ ರಾತ್ರಿ ತಂಗುವಿಕೆ | 90.00 |
| | ಇತರೆ ಅಂತರ ರಾಜ್ಯ ಸ್ಥಳಗಳಲ್ಲಿ ರಾತ್ರಿ ತಂಗುವಿಕೆ | 65.00 |
| | ರಾತ್ರಿ 21.00 ಘಂಟೆಯಿಂದ ಬೆಳಗಿನ ಜಾವ 05.00 ಘಂಟೆಯವರೆಗೆ ಕನಿಷ್ಠ 04.00 ಘಂಟೆಗಳ ಕರ್ತವ್ಯಕ್ಕೆ ನೈಟ್ ಸರ್ವಿಸ್ ಅಲೋಯನ್ಸ | 15.00 |
| ವಿಶೇಷ ಭತ್ಯೆ | ನಗರ ಪಾಲಿಕೆ/ಮಹಾನಗರ ಪಾಲಿಕೆ ಸ್ಥಳಗಳಲ್ಲಿ ಕರ್ತವ್ಯ ನಿರ್ವಹಿಸಿದಲ್ಲಿ | 15.00 |
| | ನಗರ ಪಾಲಿಕೆ/ಮಹಾನಗರ ಪಾಲಿಕೆ ಹೊರತುಪಡಿಸಿ ಇತರೆ ಸ್ಥಳಗಳಲ್ಲಿ ಕರ್ತವ್ಯ ನಿರ್ವಹಿಸಿದಲ್ಲಿ | 10.00 |
| | ಡಬ್ಬಲ್ ಡೆಕ್ಕರ್/ಟ್ರೈಲರ್ ವಾಹನಗಳ ಚಾಲನೆಗಾಗಿ | 20.00 |
| | ನಿರ್ವಾಹಕ ರಹಿತ ವಾಹನ ಚಾಲನೆಗಾಗಿ | 20.00 |

6) 5 ವರ್ಷಗಳ ಉತ್ತಮ ಹಾಜರಾತಿ ಮತ್ತು ಅಪಘಾತ ರಹಿತ ಚಾಲನೆಗಾಗಿ ಬೆಳ್ಳಿ ಪದಕ ಮತ್ತು 15 ವರ್ಷಗಳ ಉತ್ತಮ ಹಾಜರಾತಿ ಮತ್ತು ಅಪಘಾತ ರಹಿತ ಚಾಲನೆಗಾಗಿ ಸ್ವರ್ಣಪದಕ ವಿತರಿಸಲಾಗುತ್ತಿದ್ದು, ಪದಕ ವಿತರಿಸಿದ ದಿನಾಂಕದಿಂದ ಕ್ರಮವಾಗಿ ರೂ 50.00 ಮತ್ತು ರೂ 100.00 ಗಳ ಮಾಹೆಯಾನ ಪ್ರೋತ್ಸಾಹ ಧನ ನೀಡಲಾಗುತ್ತಿದೆ.

7) ವಾರ್ಷಿಕ 2 ಜೊತೆ ಸಮವಸ್ತ್ರ ಮತ್ತು ಹೊಲಿಗೆ ವೆಚ್ಚ ರೂ 350.00 ಮತ್ತು ಶೂ/ಚಪ್ಪಲಿ ಭತ್ಯೆ ರೂ 550.00 ಗಳನ್ನು ನೀಡಲಾಗುತ್ತದೆ.

8) ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಮಳೆ ಮತ್ತು ಉಣ್ಣೆ ಅಂಗಿಯ ಬದಲಾಗಿ ರೂ 650.00 ಗಳ ಮೊತ್ತವನ್ನು ಪಾವತಿಸಲಾಗುತ್ತಿದೆ.

9) ಸಮವಸ್ತ್ರ ಸ್ವಚ್ಛತೆಗಾಗಿ ಮಾಸಿಕ ರೂ 30.00 ಗಳ ವಾಷಿಂಗ್ ಭತ್ಯೆ.

10) ಬೋನಸ್ ಕಾಯ್ದೆ ಪ್ರಕಾರ ಅರ್ಹ ಚಾಲಕರಿಗೆ ಪ್ರತಿ ವರ್ಷ ಬೋನಸ್ ಪಾವತಿಸಲಾಗುತ್ತದೆ.

**ಕರಾರಸಾನಿಗಮದ ನೌಕರರಿಗೆ ವಿಸ್ತರಿಸಲಾಗಿರುವ ಇತರೆ ಸೌಲಭ್ಯಗಳ ವಿವರ:**
**ಈ ಎಲ್ಲಾ ಸವಲತ್ತುಗಳನ್ನು ನಿಗಮದಲ್ಲಿ ಕರ್ತವ್ಯ ನಿರ್ವಹಿಸುವ ಚಾಲಕರು ಪಡೆಯಲು ಅರ್ಹರಿರುತ್ತಾರೆ.**

1. **ಆರ್ಥಿಕ ಸೌಲಭ್ಯಗಳು**

- ನಿಗಮದ ನೌಕರರು ರಾಜ್ಯ ಸರ್ಕಾರದ ನೌಕರರು ಪಡೆಯುತ್ತಿರುವ ಮಾದರಿಯಲ್ಲಿಯೇ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಭತ್ಯೆ, ಸವೇತನ ರಜೆ ನಗದೀಕರಣ, ಹೆರಿಗೆ ರಜೆ ಇತ್ಯಾದಿ ಸೌಲಭ್ಯಗಳನ್ನು ಪಡೆಯುವರು.
- ಉಪಧನ ನಿಯಮಾವಳಿ ಅಥವಾ ಉಪದನ ಕಾಯ್ದೆ (ಕೈಗಾರಿಕಾ ಒಪ್ಪಂದದ ಕ್ಲಾಸ್ ನಂತೆ) ಇವೆರಡರ ಪೈಕಿ ನೌಕರರಿಗೆ ಯಾವುದು ಅನುಕೂಲವಾಗುತ್ತದೆಯೋ ಆ ಮೊತ್ತವನ್ನು ಯಾವುದೇ ಮಿತಿಯ ನಿರ್ಬಂಧವಿಲ್ಲದೇ ನೀಡಲಾಗುತ್ತಿದೆ.
- ರಾಜ್ಯ ಸರ್ಕಾರದ ಮಾದರಿಯಲ್ಲಿ ನಿಗಮದ ನೌಕರರ ಗಳಿಕೆ ರಜೆ ಮಿತಿಯನ್ನು ಹಾಲಿ 240 ರಿಂದ 300 ದಿವಸಗಳಿಗೆ ದಿನಾಂಕ.01.04.2012 ರಿಂದ ಹೆಚ್ಚಿಸಲಾಗಿದೆ ಮತ್ತು ಪ್ರತಿ ವರ್ಷ 15 ದಿವಸಗಳ ರಜೆ ನಗದೀಕರಣಕ್ಕೆ ಅವಕಾಶ ಕಲ್ಪಿಸಲಾಗಿದೆ.
- **ಸ್ವಯಂ ನಿವೃತ್ತಿ ಯೋಜನೆ:** ವೈದ್ಯಕೀಯವಾಗಿ ಅಸಮರ್ಥರಾದ ನೌಕರರಿಗೆ ಅನುಕೂಲವಾಗುವಂತೆ ರೂ.6.00 ಲಕ್ಷಗಳವರೆಗಿನ ಗರಿಷ್ಠ ಮೊತ್ತದ ಹೆಚ್ಚುವರಿ ಆರ್ಥಿಕ ಸೌಲಭ್ಯ ನೀಡುವ ಐಚ್ಛಿಕ ಸ್ವಯಂ–ನಿವೃತ್ತಿ ಯೋಜನೆ ಜಾರಿಯಲ್ಲಿದೆ.
- ನಿಗಮದ ಅಂಧ ಮತ್ತು ಅಂಗವಿಕಲ ನೌಕರರಿಗೆ ವಾಹನ ಭತ್ಯೆಯ ದರವನ್ನು ಸರ್ಕಾರದಲ್ಲಿರುವಂತೆ ಅವರ ಮೂಲ ವೇತನದ ಶೇಕಡ 6 ರ ದರದಲ್ಲಿ ಯಾವುದೇ ಗರಿಷ್ಠ ಮಿತಿಯಿಲ್ಲದೆ ನೀಡಲಾಗುತ್ತಿದೆ.
- ಬೋನಸ್ ಕಾಯಿದೆ ಅನ್ವಯ ರೂ.21,000/– ಗಳವರೆಗಿನ ವೇತನ ಪಡೆಯುತ್ತಿರುವ ಎಲ್ಲಾ ನೌಕರರಿಗೆ ಗರಿಷ್ಠ ರೂ.7000/–ಗಳ ಬೋನಸ್‌ನ್ನು ಪಾವತಿಸಲಾಗುತ್ತದೆ.
- ನಿಗಮದ ನೌಕರರು/ಅಧಿಕಾರಿಗಳಿಗೆ ಮನೆ ಕಟ್ಟಲು / ಕೊಳ್ಳಲು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಪಡೆಯುವ ಗರಿಷ್ಠ ರೂ.5.00 ಲಕ್ಷ ಸಾಲಕ್ಕೆ ಶೇಕಡ 4 ರಷ್ಟು ಬಡ್ಡಿ ಸಹಾಯ ಧನವನ್ನು ನೀಡಲಾಗುತ್ತದೆ. ಅಂದರೆ, ವಾರ್ಷಿಕ ಗರಿಷ್ಠ ರೂ.20,000/– ಮತ್ತು ಸೇವಾವಧಿಯಲ್ಲಿ ಒಟ್ಟು ರೂ.1,00,000/– ಗಳನ್ನು ಬಡ್ಡಿ ಸಹಾಯಧನವಾಗಿ ನೀಡಲಾಗುತ್ತಿದೆ.

2. **ಡ್ಯೂಟಿರೋಟಾ ಮತ್ತು ಲೀವ್ ಕಿಯೋಸ್ಕ್**

- ಚಾಲಕ ನಿರ್ವಾಹಕರಿಗೆ ಅನುಸೂಚಿಗಳನ್ನು ಸೇವಾ ಹಿರಿತನದ ಮೇರೆಗೆ ನಿಯೋಜಿಸಲು ತೀರ್ಮಾನಿಸಿ, ಪಾರದರ್ಶಕ ಡ್ಯೂಟಿ ರೋಟಾ ಪದ್ಧತಿಯನ್ನು ಜಾರಿಗೆ ತರಲಾಗಿದೆ.
- ಅದೇ ರೀತಿ, ರಜೆ ಮಂಜೂರಾತಿ ವಿಚಾರದಲ್ಲಿಯೂ ಸಹ ಪಾರದರ್ಶಕತೆಯನ್ನು ತರುವ ಪ್ರಯುಕ್ತ ಲೀವ್ ಕಿಯೋಸ್ಕ್‌ಗಳನ್ನು ಪ್ರಾಯೋಗಿಕವಾಗಿ ಅಳವಡಿಸಿ ಅನುಷ್ಠಾನಕ್ಕೆ ತರಲಾಗಿದೆ.

3. **ವೈದ್ಯಕೀಯ ಸೌಲಭ್ಯಗಳು**

- ತರಬೇತಿ ನೌಕರರು ಸೇರಿದಂತೆ ನಿಗಮದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರ ಕುಟುಂಬಸ್ಥರು ಮತ್ತು ಅವಲಂಬಿತ ಹೆತ್ತವರು ಸೇರಿದಂತೆ, ಕುಟುಂಬದವರ ವೈದ್ಯಕೀಯ ವೆಚ್ಚದ ಮರುಪಾವತಿಯನ್ನು ಸರ್ಕಾರದಲ್ಲಿರುವ ಮಾದರಿಯಲ್ಲಿ ಸಿಜಿಹೆಚ್‌ಎಸ್ 2014 – ನಾನ್ ಎನ್‌ಎಬಿಹೆಚ್ ದರದಲ್ಲಿ ಮರುಪಾವತಿ ಮಾಡಲಾಗುತ್ತದೆ.
- ಅಲ್ಲದೆ, ತೀವ್ರ ಸ್ವರೂಪದ ಖಾಯಿಲೆ ಅಥವಾ ಅಪಘಾತ ಪ್ರಕರಣಗಳಲ್ಲಿ ಗರಿಷ್ಠ ಮೊತ್ತದ ವೈದ್ಯಕೀಯ ಮುಂಗಡವನ್ನು ಸಹ ನೀಡಲಾಗುತ್ತದೆ.

- ಕನ್ನಡಕ ಖರೀದಿ ಮರುಪಾವತಿಯನ್ನು ರೂ.300/- ಗಳನ್ನು ರೂ.1000/- ಗಳಿಗೆ ದಿ:23.09.2016 ರಿಂದ ಜಾರಿಗೆ ಬರುವಂತೆ ಹೆಚ್ಚಿಸಲಾಗಿದೆ.
- ಸರ್ಕಾರ ಮಾನ್ಯತೆ ನೀಡಿರುವ ಬಹಳಷ್ಟು ಪ್ರತಿಷ್ಠಿತ ಖಾಸಗೀ ಆಸ್ಪತ್ರೆಗಳಿಗೆ ನಿಗಮವು ಸಹ ಮಾನ್ಯತೆ ನೀಡಿದ್ದು, ಆ ಆಸ್ಪತ್ರೆಗಳ ಸಹಯೋಗದೊಂದಿಗೆ ಉಚಿತ ವೈದ್ಯಕೀಯ ತಪಾಸಣಾ ಕಾರ್ಯಕ್ರಮಗಳನ್ನು ನೌಕರರ ಪರವಾಗಿ ನಿರಂತರವಾಗಿ ವ್ಯವಸ್ಥೆ ಮಾಡಲಾಗುತ್ತಿದೆ.
- ಶ್ರೀ.ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನ ಸಂಸ್ಥೆ ರವರ ಸಹಯೋಗದೊಂದಿಗೆ ಕರಾರಸಾನಿಗಮದ ನೌಕರರು ಮತ್ತು ಅಧಿಕಾರಿಗಳಿಗೆ ಹೃದಯ ಸಂಬಂಧಿ ಹತ್ತು ವೈದ್ಯಕೀಯ ತಪಾಸಣೆಗಳನ್ನು ಉಚಿತವಾಗಿ ನಡೆಸಲಾಗುವುದು.
- ಕರ್ತವ್ಯನಿರತ ಸಮಯದಲ್ಲಿ ಸಂಭವಿಸಿದ ಅಪಘಾತದಲ್ಲಿ ದೇಹದ ಅಂಗ/ಕಾಲು ಕಳೆದುಕೊಂಡ ನೌಕರರು ಉತ್ತಮ ಗುಣಮಟ್ಟದ ಕೃತಕ ಅಂಗ/ ಕಾಲು (artificial limb) ಖರೀದಿಸಲು ತಗಲುವ ವೆಚ್ಚವನ್ನು ಮಂಜೂರು ಮಾಡಲು ಯೋಜನೆಯನ್ನು ರೂಪಿಸಲಾಗಿದೆ.

<u>ಮದ್ಯವ್ಯಸನಿ ಚಿಕಿತ್ಸೆ/ ಆಪ್ತ ಸಲಹೆ:</u>

- ಕುಡಿತದ ಚಟಕ್ಕೊಳಗಾಗಿರುವ ನೌಕರರನ್ನು ಗುರುತಿಸಿ, ಅವರಿಗೆ ಜಯನಗರದಲ್ಲಿರುವ ನಿಗಮದ ಮದ್ಯವ್ಯಸನಿ ಚಿಕಿತ್ಸಾ (ಡಿ-ಅಡಿಕ್ಷನ್) ಕೇಂದ್ರದಲ್ಲಿ 40 ದಿವಸಗಳ ಡಿ-ಅಡಿಕ್ಷನ್ ಚಿಕಿತ್ಸೆಯನ್ನು ನಿಗಮದ ವತಿಯಿಂದ ಉಚಿತವಾಗಿ ನೀಡಲಾಗುವುದು ಮತ್ತು ನಂತರದಲ್ಲಿ ಫಾಲೋ ಅಫ್ ಕಾರ್ಯವನ್ನು ಸಹ ಮಾಡಲಾಗುತ್ತದೆ
- <u>ಆಪ್ತ ಸಲಹೆ:</u> ಗೈರುಹಾಜರಿ ಪ್ರಕರಣಗಳಲ್ಲಿ ಭಾಗಿಯಾಗುವ ನೌಕರರನ್ನು ಮತ್ತು ಮದ್ಯವ್ಯಸನಿ ಚಿಕಿತ್ಸೆ ಪಡೆದ ನೌಕರರನ್ನು ನಿರಂತರವಾಗಿ ವೈಯಕ್ತಿಕ ಮತ್ತು ಕೌಟುಂಬಿಕ ಆಪ್ತಸಲಹೆಗೆ ಒಳಪಡಿಸಲಾಗುತ್ತದೆ.

4. <u>ಪ್ರಶಸ್ತಿ : ಪುರಸ್ಕಾರಗಳು:</u>

- <u>ಶೌರ್ಯ ಪ್ರಶಸ್ತಿ ಪದಕ ಯೋಜನೆ:</u> ಕರ್ತವ್ಯ ನಿರ್ವಹಣೆಯಲ್ಲಿ ಶ್ಲಾಘನೀಯ, ತ್ಯಾಗಮಯ ಮತ್ತು ಆದರ್ಶಪ್ರಾಯವಾದ ಸೇವೆ ಸಲ್ಲಿಸಿದ ನೌಕರರನ್ನು ಗುರುತಿಸಿ, ರೂ.20,000/- ಗಳ ವರೆಗಿನ ನಗದು ಬಹುಮಾನ ಹಾಗೂ ಸ್ವರ್ಣ ಪದಕ ನೀಡಿ ಪುರಸ್ಕರಿಸುವ ಪದ್ಧತಿ ಸಹ ಜಾರಿಯಲ್ಲಿದೆ.

5. <u>ನೌಕರರ ಮತ್ತು ಅಧಿಕಾರಿಗಳ ಕುಟುಂಬದವರಿಗೆ ವಿಸ್ತರಿಸಿರುವ ಸೌಲಭ್ಯಗಳು:</u>

- ಎಸ್.ಎಸ್.ಎಲ್.ಸಿ ,ಪಿ.ಯು.ಸಿ ಮತ್ತು ಬಿಇ ಸೇರಿದಂತೆ ಪದವಿ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಗಳಿಸಿದ ನೌಕರರ ಮಕ್ಕಳಿಗೆ ರೂ: 1,000/- ರಿಂದ ರೂ:4,000/- ರವರೆಗೆ ನಗದು ಪುರಸ್ಕಾರವನ್ನು ನೀಡಲಾಗುತ್ತಿದೆ. ಅಲ್ಲದೆ, ನಿಗಮದ ವಿದ್ಯಾ ಸಹಾಯ ನಿಧಿ ಯೋಜನೆಯಡಿ ನೌಕರರ ಮಕ್ಕಳಿಗೆ ವಿದ್ಯಾ ಸಹಾಯ ನೀಡಲಾಗುತ್ತಿದೆ.
- ನೌಕರರು ಸೇವೆಯಲ್ಲಿರುವಾಗ ನಿಧನರಾದ ಪಕ್ಷದಲ್ಲಿ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಒರ್ವ ಅವಲಂಬಿತರಿಗೆ ಅನುಕಂಪದ ಆಧಾರದ ನೇಮಕ ನೀಡಲಾಗುವುದು.
- ನಿಗಮದ ನೌಕರರ ಮಕ್ಕಳು ಶಾಲಾ /ಕಾಲೇಜುಗಳಿಗೆ ಪ್ರಯಾಣಿಸಲು ಉಚಿತ ಬಸ್ ಪಾಸ್ ಸೌಲಭ್ಯವನ್ನು ವಿಸ್ತರಿಸಲಾಗಿದೆ. ಅಲ್ಲದೆ, ನಿಧನರಾದ ನೌಕರರ ಮಕ್ಕಳಿಗೂ ಸಹ ಈ ಸೌಲಭ್ಯವನ್ನು ವಿಸ್ತರಿಸಲಾಗಿದೆ.

- ನಿಗಮದ ನೌಕರರು ವಾರ್ಷಿಕ ಒಂದು ಸಾರಿ ಮಾತ್ರ (ಒಂದು ತಿಂಗಳ ಅವಧಿಯಲ್ಲಿ ಚಾಲ್ತಿಯಲ್ಲಿರುವಂತೆ) ಕುಟುಂಬ ಸಮೇತ ಪ್ರಯಾಣಿಸಲು ಉಚಿತ ಪಾಸ್ ನೀಡಲಾಗುವುದು.
- ನಿಗಮದ ನೌಕರರು ಮರಣ ಹೊಂದಿದ ಸಂದರ್ಭದಲ್ಲಿ ಅವರ ಅವಲಂಬಿತರಿಗೆ ಅಂತ್ಯಕ್ರಿಯೆ ಮತ್ತು ಕಾರ್ಯಗಳನ್ನು ಮಾಡಲು ಅನುಕೂಲವಾಗುವಂತೆ ನಿಗಮದ ವತಿಯಿಂದ ರೂ.10,000/- ಗಳನ್ನು ಎಕ್ಸ್‌ಗ್ರೇಷಿಯಾ ರೂಪದಲ್ಲಿ ನೀಡಲಾಗುತ್ತದೆ.

6. **ನೌಕರರ ಕುಟುಂಬ ಕಲ್ಯಾಣ ಯೋಜನೆ:**

ನಿಗಮದ ನೌಕರರ ಕುಟುಂಬ ಕಲ್ಯಾಣ ಯೋಜನೆಯ ಸದಸ್ಯ ನೌಕರರು ಸೇವೆಯಲ್ಲಿರುವಾಗ ಅಕಾಲಿಕ ಮರಣ ಹೊಂದಿದ ಪಕ್ಷದಲ್ಲಿ ನಿಯಮಾನುಸಾರ ಅರ್ಹ ಉಪದನ, ಭವಿಷ್ಯನಿಧಿ, ಡಿಆರ್‌ಬಿಎಫ್ ಇತ್ಯಾದಿಗಳ ಜೊತೆಗೆ ಹೆಚ್ಚುವರಿಯಾಗಿ ರೂ: 3.00 ಲಕ್ಷಗಳ ಗರಿಷ್ಠ ಮೊತ್ತದ ಪರಿಹಾರ ಹಣವನ್ನು ಅವರ ಅವಲಂಬಿತರಿಗೆ ನೀಡುವ ಮಹತ್ವದ ಯೋಜನೆ ಜಾರಿಯಲ್ಲಿರುತ್ತದೆ.

7. **ಇತರೆ ಸೌಲಭ್ಯಗಳು:**

- ಅಂಗವಿಕಲ ವ್ಯಕ್ತಿಗಳ ಕಾಯ್ದೆ -1995ರಲ್ಲಿ ಸೂಚಿಸಲಾದ ಖಾಯಿಲೆಯಿಂದ ಬಳಲುತ್ತಿದ್ದು, ಕನಿಷ್ಠ ಶೇಕಡ 40 ಕ್ಕಿಂತ ಕಡಿಮೆ ಇರದ ಪ್ರಮಾಣದ ಅಂಗವಿಕಲತೆಯನ್ನು ಹೊಂದಿರುವ ನೌಕರರನ್ನು ಪರ್ಯಾಯ ಹುದ್ದೆಯಲ್ಲಿ ನಿಯೋಜಿಸಿ ಅನುಕೂಲ ಮಾಡಿಕೊಡಲಾಗುತ್ತದೆ.
- ನೌಕರರ ಅವಲಂಬಿತ ಅಂಧ ಅಥವಾ ಚಲನವೈಕಲ್ಯತೆ ಹೊಂದಿರುವ ಮಕ್ಕಳ ಶಿಕ್ಷಣಕ್ಕಾಗಿ ಒಂದು ಮಗುವಿಗೆ ತಲಾ ರೂ.500/- ಗಳಂತೆ ಶಿಕ್ಷಣ ಭತ್ಯೆಯನ್ನು ಮತ್ತು ಅಂಗವಿಕಲತೆ ಹೊಂದಿರುವ ನೌಕರರ ಮಕ್ಕಳ ಪಾಲನೆ/ಪೋಷಣೆ ಮಾಡುವುದಕ್ಕಾಗಿ ಮಾಸಿಕ ರೂ.500/- ಗಳ ದರದಲ್ಲಿ ಪೋಷಣಾ ಭತ್ಯೆಯನ್ನು ನಿಗಮದ ನೌಕರರಿಗೆ ಮಂಜೂರು ಮಾಡಲಾಗುತ್ತದೆ.
- ಮಾರಣಾಂತಿಕ ಮತ್ತು ಮಾರಣಾಂತಿಕವಲ್ಲದ ಅಪಘಾತ ಪ್ರಕರಣಗಳಲ್ಲಿ ಭಾಗಿಯಾದ ಚಾಲಕರಿಗೆ ಪ್ರಸ್ತುತ ನೀಡುತ್ತಿರುವ ಕಾನೂನು ಸಹಾಯ ಧನ ರೂ.2500/-ಮತ್ತು ರೂ.1900/- ಗಳನ್ನು ಕ್ರಮವಾಗಿ ರೂ.5000/- ಮತ್ತು ರೂ2500/- ಗಳಿಗೆ ಹೆಚ್ಚಿಸಲಾಗಿದೆ.

--**--